# ಪಠ್ಯಪುಸ್ತಕದ ನೆರವಿನೊಂದಿಗೆ ಆತ್ಮಚರಿತ್ರೆ ಬರೆಯುವ ಪ್ರಯತ್ನ

ಛೋಟೆ ಲಾಲ್

ನಾನು ಎಸ್.ಸಿ.ಇ.ಆರ್.ಟಿ.ಯ ಪಠ್ಯಪುಸ್ತಕದಲ್ಲಿರುವ 'ಚಂಬಲ್ ಕಿ ಆತ್ಮಕಥಾ' (ಚಂಬಲ್ ನದಿಯ ಆತ್ಮಚರಿತ್ರೆ) ಎಂಬ ಪಾಠವನ್ನು ಆರನೇ ತರಗತಿಯ ಮಕ್ಕಳಿಗೆ ಪಾಠ ಮಾಡುವಾಗ ಮಕ್ಕಳೂ ಆತ್ಮಚರಿತ್ರೆ ಬರೆಯುವಂತೆ ಮಾಡುವ ಒಂದು ಪ್ರಯತ್ನ ಮಾಡಿದೆ.

ಪಠ್ಯದ ಶೀರ್ಷಿಕೆಗೆ ಸಂಬಂಧಿಸಿದಂತೆ ಕೆಲವು ಪ್ರಶ್ನೆಗಳೊಂದಿಗೆ ನಾನು ಪಾಠವನ್ನು ಶುರು ಮಾಡಿದೆ. ಅವೆಂದರೆ, ಆತ್ಮಚರಿತ್ರೆ ಎಂದರೇನು? ಅದನ್ನು ಯಾರು ಬರೆಯುತ್ತಾರೆ? ಆತ್ಮಚರಿತ್ರೆ ಬರೆಯಲು ಲೇಖಕರಿಗೆ ಇದ್ದ ಉದ್ದೇಶವೇನು?- ಹೀಗೆ. ಮಕ್ಕಳೊಂದಿಗೆ ಈ ಪ್ರಶ್ನೆಗಳ ಬಗ್ಗೆ ಚರ್ಚೆ ಮಾಡುತ್ತಿರುವಾಗ, ಆತ್ಮಚರಿತ್ರೆ ಎಂದರೆ ಒಬ್ಬ ವ್ಯಕ್ತಿಯ ಜೀವನದಲ್ಲಿ ನಡೆದ ಹಿತಕರ ಮತ್ತು ಅಹಿತಕರವಾದ ಘಟನೆಗಳು ಮತ್ತು ಸಂಘರ್ಷಗಳನ್ನು ಕುರಿತ ವಿವರಣೆ ಎಂಬ ಅಂಶ ಬೆಳಕಿಗೆ ಬಂತು. ಆತ್ಮಚರಿತ್ರೆ ಬರೆಯುವ ಉದ್ದೇಶ ಒಬ್ಬ ವ್ಯಕ್ತಿಯ ಜೀವನದ ಹೋರಾಟಗಳ ಬಗ್ಗೆ ಮುಂದಿನ ತಲೆಮಾರಿಗೆ ತಿಳಿಸಿಕೊಡುವುದು. ಅದರೊಂದಿಗೆ, ಅವರಿಗೆ ಈ ಎಲ್ಲ ಅಂಶಗಳನ್ನು ಅವರದೇ ಮಟ್ಟದಲ್ಲಿ ಅರ್ಥೈಸಿಕೊಳ್ಳಲು ಸಾಧ್ಯವಾಗುವುದರೊಂದಿಗೆ, ನಿರ್ದಿಷ್ಟ ಸಂದರ್ಭದಲ್ಲಿ ಹೇಗೆ ವರ್ತಿಸಬೇಕು, ಯಾವ್ಯಾವ ತಂತ್ರಗಳು ಸೋಲು ಗೆಲುವು ತಂದುಕೊಡಬಲ್ಲವು ಎಂಬುದನ್ನು ಸಾವಧಾನವಾಗಿ ಕಲಿಯಲು ಸಾಧ್ಯವಾಗುತ್ತದೆ. ಇದನ್ನು ಮಕ್ಕಳೊಂದಿಗೆ ಚರ್ಚಿಸಿದ ಬಳಿಕ, ಅವರೆಲ್ಲರೂ ತಮ್ಮ ಮನೆಗಳಲ್ಲಿ ಮನೆ ಮಂದಿಯೊಂದಿಗೆ ಅವರ ಬದುಕಿನ ಅನುಭವಗಳ ಬಗ್ಗೆ ಕೇಳಿ, ಅದರ ಬಗ್ಗೆ ಬರೆಯಬೇಕು ಎಂದು ತಿಳಿಸಿದೆ. ಸುಮಾರು ಮೂರನೇ ಎರಡು ಪಾಲು ಮಕ್ಕಳು ತಮ್ಮ ಹೆತ್ತವರು ಮತ್ತು ಅಜ್ಜ-ಅಜ್ಜಿಯರ ಜೊತೆ ಮಾತನಾಡಿ, ಅವರ ಜೀವನಾನುಭವಗಳ ಬಗ್ಗೆ ಒಂದೊಂದು ಪುಟದಷ್ಟು ಬರೆದುಕೊಂಡು ಬಂದರು. ಆನಂತರ ಅವುಗಳ ಬಗ್ಗೆ ತರಗತಿಯಲ್ಲಿ ಚರ್ಚಿಸಿದೆವು. ಒಬ್ಬ ವ್ಯಕ್ತಿಯ ಜೀವನದ ಎಲ್ಲ ಮುಖಗಳ ಬಗ್ಗೆ ಓದಿಸಿಕೊಂಡು ಹೋಗುವ ರೀತಿಯಲ್ಲಿ ಹೇಗೆ ಬರೆಯುವುದು ಎಂಬ ಬಗ್ಗೆ ಚರ್ಚಿಸಿದೆವು. ಅದೇ ವೇಳೆ, ಒಬ್ಬ ವ್ಯಕ್ತಿಯ ಜೀವನದ ಅನುಭವವು ಸ್ಫೂರ್ತಿ ತುಂಬಲು ಮತ್ತು ಪಾಠ ಕಲಿಯಲೂ ಒದಗಿ ಬರಬಲ್ಲದು ಎಂಬುದನ್ನು ಮಕ್ಕಳು ಅರ್ಥಮಾಡಿಕೊಂಡರು.

ಇದಾದ ಬಳಿಕ ನಾವು ಚಂಬಲ್ ನದಿಯ ಆತ್ಮಚರಿತ್ರೆಯ ಪಾಠವನ್ನು ಓದಿದೆವು. ಪಾಠವು ಚಂಬಲ್ ನದಿಯ ಪ್ರಸ್ತುತ ಸ್ಥಿತಿಗತಿ, ಅದರ ವಾತಾವರಣ ಮತ್ತು ಸಮಾಜಕ್ಕೆ ಅದು ನೀಡುವ ಕೊಡುಗೆಗಳ ಬಗ್ಗೆ ವಿವರಿಸುತ್ತದೆ. ನದಿಯ ಸೌಂದರ್ಯ ವಿವರಣೆ ವಿಶೇಷವಾಗಿ ಬೇರೆ ಬೇರೆ ಉಪನದಿಗಳು ಸೇರಿದ ಅನಂತರದ ಸುಂದರ ವಿವರಣೆ ಅದರಲ್ಲಿದೆ. ಚಂಬಲ್ ನದಿಯಲ್ಲಿ ಆಗುತ್ತಿರುವ ಅವ್ಯವಸ್ಥಿತ ಮಾಲಿನ್ಯ ಮತ್ತು ಅದರಿಂದ ಪರಿಸರದ ಮೇಲಾಗುತ್ತಿರುವ ಪರಿಣಾಮಗಳನ್ನು ವಿವರಿಸಲಾಗಿದೆ, ಪ್ರಸ್ತುತ ತಲೆಮಾರಿಗೆ ಅದೊಂದು ಎಚ್ಚರಿಕೆಯಾಗಿದೆ. ಕೃಷಿ, ವಿದ್ಯುತ್ ಉತ್ಪಾದನೆ, ಅಂತರ್ಜಲ ಹೆಚ್ಚಳ ಮತ್ತು ಸುತ್ತಮುತ್ತಲಿನ ಪ್ರದೇಶಗಳ ಸಮೃದ್ಧತೆಯ ಹೆಚ್ಚಳದಲ್ಲಿ ಚಂಬಲ್ ನದಿಯ ಪಾತ್ರದ ಬಗ್ಗೆ ವಿಶದೀಕರಿಸಲಾಗಿದೆ. ಕೊನೆಯಲ್ಲಿ, ಚಂಬಲ್ ನದಿಯು ಈಗ ತನ್ನ ಅಸ್ತಿತ್ವಕ್ಕಾಗಿ ಹೇಗೆ ಹೋರಾಡುತ್ತಿದೆ ಎಂಬುದನ್ನೂ ವಿಶೇಷವಾಗಿ ವಿವರಿಸಲಾಗಿದೆ.

ಈ ಪಾಠದಲ್ಲಿ ಮೂರು ಮುಖ್ಯ ಆಯಾಮಗಳನ್ನು ಎತ್ತಿ ತೋರಿಸಲಾಗಿದೆ. ಮೊದಲನೆಯದು, ಒಬ್ಬ ವ್ಯಕ್ತಿ ಆತನ/ಆಕೆಯ ಅಸ್ತಿತ್ವವನ್ನು ಹೇಗೆ ರೂಪಿಸಿಕೊಳ್ಳುತ್ತಾನೆ/ಳೆ ಎಂದು. ಅಂದರೆ, ಈ ಪ್ರಪಂಚದಲ್ಲಿ ಆಕೆ ಅಥವಾ ಆತ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವ ಪ್ರತಿಯೊಂದು ಕತೆಯೂ ವಿಭಿನ್ನವಾಗಿರುತ್ತದೆ.

ಎರಡನೆಯ ಆಯಾಮ ಏನೆಂದರೆ, ಈ ಪ್ರಪಂಚದ ಉದ್ಧಾರಕ್ಕಾಗಿ ಒಬ್ಬ ವ್ಯಕ್ತಿ ಹೇಗೆ ಕೊಡುಗೆ ನೀಡಬಲ್ಲರು? ಅಂದರೆ, ಬೇರೆಯವರಿಗಾಗಿ ಬದುಕುವ ರೀತಿಯಲ್ಲಿ ಅವನು/ಅವಳು ಹೇಗೆ ಬೆಳೆಯಬಲ್ಲರು ಎಂಬುದು.

ಮೂರನೆಯ ಆಯಾಮ, ತನ್ನ ಜೀವಮಾನದಲ್ಲಿ ಎದುರಾಗುವ ಕಷ್ಟಗಳ ವಿರುದ್ಧ ಅವರು ಹೇಗೆ ಹೋರಾಡುತ್ತಾರೆ ಎಂಬುದು. ಈ ರೀತಿಯಲ್ಲಿ, ಆತ್ಮಚರಿತ್ರೆ ಬರೆಯುವ ಬಗ್ಗೆ ಸ್ಪಷ್ಟತೆಯನ್ನು ನೀಡಲಾಯಿತು.

ಇದಾದ ಬಳಿಕ, ಮಕ್ಕಳಿಗೆ ತಮ್ಮ ಹಿಂದಿನ ದಿನಗಳ ಬಗ್ಗೆ ಆಲೋಚಿಸುವಂತೆ ಮತ್ತು ಆ ನೆನಪುಗಳನ್ನೆಲ್ಲ ಒಟ್ಟುಗೂಡಿಸುವಂತೆ ತಿಳಿಸಲಾಯಿತು. ಅಲ್ಲದೆ, ಗ್ರಂಥಾಲಯಕ್ಕೆ ಹೋಗಿ ಯಾವುದಾದರೂ ಆತ್ಮಚರಿತ್ರೆಯನ್ನು ಓದುವಂತೆಯೂ ತಿಳಿಸಲಾಯಿತು. ಡಾ.ಹರಿವಂಶರಾಯ್ ಬಚ್ಚನ್ ಅವರ 'ಕ್ಯಾ ಭೂಲೂನ್ ಕ್ಯಾ ಯಾದ್ ಕರೂನ್' (ನಾನು ಯಾವುದನ್ನು ನೆನಪಿಸಿಕೊಳ್ಳಲಿ ಮತ್ತು ಯಾವುದನ್ನು ಮರೆಯಲಿ?) ಆತ್ಮಚರಿತ್ರೆ ಪುಸ್ತಕದ ಕೆಲವು ಭಾಗಗಳನ್ನು ಮಕ್ಕಳಿಗೆ ಹಂಚಲಾಯಿತು. ಪಠ್ಯಪುಸ್ತಕಗಳು ಶಿಕ್ಷಕರಿಗೆ ಆಧಾರವನ್ನಷ್ಟೇ ನೀಡುತ್ತವೆ ಎಂಬ ವಾಸ್ತವ ಸಂಗತಿ ಈ ರೀತಿಯ ಚರ್ಚೆಗಳಿಂದ ಹೊರಬಂತು ಅಥವಾ ಪಠ್ಯಪುಸ್ತಕಗಳು ಕೇವಲ ಮಾರ್ಗದರ್ಶಿಗಳಷ್ಟೇ ಎಂದೂ ಹೇಳಬಹುದು. ಒಂದು ವೇಳೆ ನಾವು ಶಿಕ್ಷಕರು ಪಠ್ಯಪುಸ್ತಕದಲ್ಲಿ ಕೊಟ್ಟಷ್ಟೇ ಅಂಶಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಿಕೊಟ್ಟರೆ, ಆ ವಿಷಯವಾಗಿ ವಿವರವಾಗಿ ತಿಳಿದುಕೊಳ್ಳುವ ಅವಕಾಶದಿಂದ ಅವರನ್ನು ನಾವು ವಂಚಿತರನ್ನಾಗಿ ಮಾಡಿದಂತಾಗುತ್ತದೆ.

ಮುಂದೆ, ಈ ಪ್ರಕ್ರಿಯೆಯಲ್ಲಿ, ಪಠ್ಯದ ಕೇಂದ್ರಬಿಂದುವೇ ಕಳೆದುಹೋದಂತಾಗಿ, ಸ್ವತಃ ಶಿಕ್ಷಕರ ಪಾತ್ರಕ್ಕೂ ಇತಿಮಿತಿ ಹೇರಿದಂತಾಗುತ್ತದೆ. ಒಂದು ವಿಷಯದ ಬಗ್ಗೆ ಪಠ್ಯದಲ್ಲಿ ಕೊಟ್ಟಿರುವಷ್ಟು ಅಂಶಗಳಿಗೆ ಮಾತ್ರ ಗಮನ ನೀಡಿದರೆ, ನಾವು ಹೊರಗಿನ ನಿದರ್ಶನಗಳನ್ನು ಉಲ್ಲೇಖಿಸಲು ಆಗುವುದಿಲ್ಲ. ಅಲ್ಲದೆ, ಮಕ್ಕಳಿಗೆ ಅವರು ತಮ್ಮ ಸುತ್ತಮುತ್ತ ಕಂಡ, ಅನುಭವಿಸಿದ ಸಂಗತಿಗಳನ್ನು ಹಂಚಿಕೊಳ್ಳಲೂ ಅವಕಾಶವಾಗುವುದಿಲ್ಲ. ಅಂತಹ ಪರಿಸ್ಥಿತಿಯಲ್ಲಿ, ನಾವು ಮಾಹಿತಿಯನ್ನಷ್ಟೇ ನೀಡಲು ಸಾಧ್ಯ ಹಾಗೂ ಶಿಕ್ಷಕರಾಗಿ ನಾವು ಪಠ್ಯದಲ್ಲಿನ ಪ್ರಾಸಂಗಿಕ ಸಂಗತಿಗಳನ್ನು ವಿದ್ಯಾರ್ಥಿಗಳು ಇರುವ ವಾತಾವರಣದೊಂದಿಗೆ ಪ್ರಾಸಂಗಿಕಗೊಳಿಸಿ ವಿವರಿಸಲು ಸಾಧ್ಯವಾಗುವುದಿಲ್ಲ. ಪರಿಣಾಮವಾಗಿ, ಮಕ್ಕಳಲ್ಲಿ ತಿಳಿವಳಿಕೆಯನ್ನು ಹುಟ್ಟುಹಾಕುವ ಸ್ವತಂತ್ರ ಪ್ರಕ್ರಿಯೆಯನ್ನು- ಅದು ಕಲಿಕಾ ಪ್ರಕ್ರಿಯೆಯಲ್ಲಿ ಪ್ರಮುಖವಾದುದು- ನಿರ್ಬಂಧಿಸಿದಂತಾಗುತ್ತದೆ. ಹೀಗೆ ಮಾಡುವುದರಿಂದ, ಶಿಕ್ಷಕ/ಶಿಕ್ಷಕಿ ತನ್ನ ಪಾತ್ರವನ್ನು ತಾನೇ ಮಿತಿಗೊಳಿಸಿದಂತಾಗುವುದರ ಜೊತೆಗೆ, ಪಠ್ಯಪುಸ್ತಕಕ್ಕೆ ಪೂರಕವಾದ ಓದುವ ಸಾಮಗ್ರಿಗಳನ್ನು ಓದುವ ಅನುಭವದಿಂದ ಮತ್ತು ವಿಚಾರ ಮಾಡುವ ಅವಕಾಶದಿಂದ ವಿದ್ಯಾರ್ಥಿಗಳನ್ನು ವಂಚಿತರನ್ನಾಗಿ ಮಾಡುತ್ತದೆ.

ಇದಕ್ಕೆ ವ್ಯತಿರಿಕ್ತವಾಗಿ, ಈ ವಿಧಾನದಿಂದ, ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2005(ಎನ್.ಸಿ.ಎಫ್ 2005) ಶಿಫಾರಸು ಮಾಡಿರುವ ವಿಧಾನವೂ ಆಗಿರುವ, ಮಕ್ಕಳ ಬದುಕಿನ ಸಂದರ್ಭಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಪಾಠವನ್ನು ಕೈಗೆತ್ತಿಕೊಂಡೆವು. ವಿದ್ಯಾರ್ಥಿಗಳಿಗೆ ತಮ್ಮ ಹಿಂದಿನ ಅನುಭವಗಳನ್ನು ನೆನಪಿಸಿಕೊಳ್ಳಲು ಅನುವು

ಆಗುವಂತೆ, ಅವರ ಬದುಕಿನ ಹಳೆಯ ದಿನಗಳನ್ನು ಮೆಲುಕು ಹಾಕಿಕೊಳ್ಳಲು ಅವಕಾಶ ನೀಡಲಾಯಿತು. ಇದಲ್ಲದೆ, ಪೂರಕ ಓದುವ ಸಾಮಗ್ರಿಗಳಿಗೆ ತಮ್ಮನ್ನು ಒಡ್ಡಿಕೊಳ್ಳುವುದರಿಂದ ವಿದ್ಯಾರ್ಥಿಗಳು ಸ್ವಯಂ ಅಧ್ಯಯನದ ಹವ್ಯಾಸವನ್ನು ರೂಢಿಸಿಕೊಂಡಂತಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಅದು ಕೂಡಾ ಬಹಳ ಪ್ರಮುಖ ಅಂಶವಾಗಿದೆ. ಆತ್ಮಚರಿತ್ರೆಯ ಬರಹದಿಂದಾಗಿ ಮಕ್ಕಳಿಗೆ ತಮ್ಮ ಬಗ್ಗೆ ತಾವೇ ಸಂಪರ್ಕ ಸಾಧಿಸಲು ಹಾಗೂ ಅದಕ್ಕೆ ಪ್ರಸ್ತುತವಾದ ಓದುವ ಸಾಮಗ್ರಿಗಳ ಬಗ್ಗೆ ತಿಳಿದುಕೊಳ್ಳುವ ಅವಕಾಶ ಸಿಕ್ಕಿತು.

ಇಲ್ಲಿ ಒಂದು ಉದಾಹರಣೆಯನ್ನು ನೀಡಲಾಗಿದೆ. ಅಂಜಲಿ ಜನಿಸಿದಾಗ ತಮಗುಂಟಾಗಿದ್ದ ಭಾವನೆಗಳನ್ನು ಅವಳ ತಂದೆ ಮಗಳೊಂದಿಗೆ ಹಂಚಿಕೊಂಡಿದ್ದರು. ಅಂಜಲಿ ಆ ನೆನಪುಗಳನ್ನು ಆತ್ಮಚರಿತ್ರೆಯ ರೂಪದಲ್ಲಿ ಬರೆದಿದ್ದಾಳೆ.



***

(ಮೂಲತಃ ಹಿಂದಿಯಲ್ಲಿ ಬರೆಯಲಾಗಿದ್ದ ಈ ಲೇಖನವನ್ನು ನಳಿನಿ ರಾವೆಲ್ ಅವರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ).

**ಛೋಟೆ ಲಾಲ್:** ಇವರು ಅಜೀಂ ಪ್ರೇಮ್‌ಜಿ ಫೌಂಡೇಷನ್‌ನಲ್ಲಿ 2011ರ ಆಗಸ್ಟ್‌ನಿಂದಲೂ ಕಾರ್ಯನಿರ್ವಹಿಸುತ್ತಿದ್ದಾರೆ. ಅದಕ್ಕೂ ಮೊದಲು ಅವರು, ಆಳ್ವಾರ್ ಜಿಲ್ಲೆಯ ಬೋಧ್ ಶಿಕ್ಷಾ ಸಮಿತಿಯಲ್ಲಿ ಸಂಯೋಜಕರಾಗಿ ಮತ್ತು ಸುಗಮಕಾರರಾಗಿ ಸುಮಾರು 11 ವರ್ಷ ಸೇವೆ ಸಲ್ಲಿಸಿದ್ದಾರೆ. ಅಲ್ಲಿ ಹಿಂದಿ ಮತ್ತು ಗಣಿತದ ಸಂಪನ್ಮೂಲ ವ್ಯಕ್ತಿಯಾಗಿ, 15 ಶಾಲೆಗಳನ್ನು ಉತ್ತಮವಾಗಿ ರೂಪಿಸುವ ಉದ್ದೇಶದಿಂದ ಶಿಕ್ಷಕರು, ವಿದ್ಯಾರ್ಥಿಗಳು ಹಾಗೂ ಸಮುದಾಯದೊಂದಿಗೆ ಕೆಲಸ ಮಾಡಿದ್ದಾರೆ. ಅದಕ್ಕೂ ಮೊದಲು, ರಾಜಸ್ಥಾನ ಸರ್ಕಾರ

ಅನುಷ್ಠಾನಕ್ಕೆ ತಂದಿದ್ದ ಪ್ರಾಯೋಗಿಕ ಯೋಜನೆಯಾದ ‘ಲೋಕ್ ಜಂಬಿಶ್’ನಲ್ಲಿ ಮುಖ್ಯವಾಗಿ ಹಲವು ಹಳ್ಳಿಗಳಲ್ಲಿ ಕಾರ್ಯ ನಿರ್ವಹಿಸಿದ್ದಾರೆ.

ಅವರ ಸಂಪರ್ಕಕ್ಕೆ: chhote.lal@azimpremjifoundation.org

ಅನುವಾದ: ರೋಹಿಣಿ ಮುಂಡಾಜೆ ಪರಿಶೀಲನೆ: ನಾಗಮಣಿ ಎಸ್.ಎನ್.